


# ಕರ್ನಾಟಕ ವಿಧಾನಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 24-03-2021 ಪ್ರಶ್ನೆ ಸಂಖ್ಯೆ : 1762 (1988)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಶಶೀಲ್ ಜಿ. ನಮೋಶಿ (ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 24-03-2021

ಉತ್ತರಿಸುವ ಸಚಿವರು: ಮಾನ್ಯ ಕಂದಾಯ ಸಚಿವರು

ವಿಷಯ : ಸಂವಿಧಾನ 371ಜೆ ಅಡಿಯಲ್ಲಿ ಸುಳ್ಳು ದಾಖಲೆ ನೀಡಿ ಅರ್ಹತಾ ಪ್ರಮಾಣ ಪತ್ರ ಪಡೆಯುತ್ತಿರುವ ಕುರಿತು

(ಅ) ಸಂವಿಧಾನದ 371ಜೆ ಅಡಿಯಲ್ಲಿ ಸುಳ್ಳು ದಾಖಲೆ ನೀಡಿ ಪಡೆದಂತಹ ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದು ಪಡಿಸಲು ಇರುವ ಸಕ್ಷಮ ಪ್ರಾಧಿಕಾರ ಯಾರು;

(ಆ) ಸುಳ್ಳು ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದುಪಡಿಸಲು ಸರಕಾರ ಕೈಗೊಂಡ ಕ್ರಮಗಳೇನು; ಸುಳ್ಳು ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದುಪಡಿಸಲು ಸಹಾಯಕ ಆಯುಕ್ತರು ಮತ್ತು ಜಿಲ್ಲಾಧಿಕಾರಿಗಳು ವಿಳಂಬ ಮಾಡುತ್ತಿರುವುದು ಸರಕಾರದ ಗಮನಕ್ಕೆ ಬಂದಿದೆಯೇ;

(ಇ) ಸಂವಿಧಾನದ 371ಜೆ ಕಾನೂನು ಅಡಿಯಲ್ಲಿ ಅರ್ಹತಾ ಪ್ರಮಾಣ ಪತ್ರ ಅನುಬಂಧ-1 ಮತ್ತು ಅನುಬಂಧ-ಬಿ ಯಲ್ಲಿ ಎಷ್ಟು ಸುಳ್ಳು ಪ್ರಮಾಣ ಪತ್ರಗಳನ್ನು ವಿತರಿಸಲಾಗಿದೆ; ಅಂತಹ ಎಷ್ಟು ಸುಳ್ಳು ಪ್ರಮಾಣ ಪತ್ರಗಳನ್ನು ಇಲ್ಲಿಯವರೆಗೆ ರದ್ದುಪಡಿಸಲಾಗಿದೆ;

(ಈ) ಸುಳ್ಳು ಅರ್ಹತಾ ಪ್ರಮಾಣ ಪತ್ರಗಳನ್ನು ರದ್ದುಪಡಿಸಲು ಇಲ್ಲಿಯವರೆಗೆ ಸಲ್ಲಿಸಲಾದ ಅರ್ಜಿಗಳು ಎಷ್ಟು; ಅವುಗಳಲ್ಲಿ ಎಷ್ಟು ಅರ್ಜಿಗಳನ್ನು ವಿಲೇವಾರಿ ಮಾಡಲಾಗಿದೆ ಬಾಕಿ ಇರುವ ಅರ್ಜಿಗಳು ಎಷ್ಟು; (ತಾಲ್ಲೂಕುವಾರು ಮಾಹಿ ನೀಡುವುದು)

(ಉ) ಸುಳ್ಳು ಪ್ರಮಾಣ ಪತ್ರಗಳನ್ನು ವಿತರಿಸಿದ ಅಧಿಕಾರಿಗಳ ಮೇಲೆ ಯಾವ ಕ್ರಮ ಜರುಗಿಸಲಾಗಿದೆ;

(ಊ) ಸುಳ್ಳು ದಾಖಲೆ ನೀಡಿ 371ಜೆ ಅರ್ಹತಾ ಪ್ರಮಾಣ ಪತ್ರಗಳನ್ನು ಪಡೆದಂತಹ ಅಭ್ಯರ್ಥಿಗಳ ಮೇಲೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ?